# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: : 106
2. ಸದಸ್ಯರ ಹೆಸರು : ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ
೩. ಉತ್ತರಿಸಬೇಕಾದ ದಿನಾಂಕ: : 16-09-2021
3. ಉತ್ತರಿಸುವ ಸಚಿವರು : ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನೆ ಮತ್ತು ಸಣ್ಣ ನೀರಾವರಿ ಸಚಿವರು

| ಕ್ರಮ ಸಂಖ್ಯೆ | ಪ್ರಶ್ನೆ | ಉತ್ತರ |
|---|---|---|
| ಅ | ಕಾರವಾರ ಜಿಲ್ಲೆಯ ಜೋಯಿಡಾ ತಾಲ್ಲೂಕಿನ ಅಣಶಿ ಅರಣ್ಯ ವಲಯದಲ್ಲಿ ಬರುವ ಬಿರಡೋಳಿ ಪಾಟ್ನೆ ಬಳಿ ಸಣ್ಣ ನೀರಾವರಿ ಇಲಾಖೆ ವಿಶೇಷ ಘಟಕ ಯೋಜನೆಗಳ ಅಡಿಯಲ್ಲಿ ಲಕ್ಷಾಂತರ ಹಣ ಖರ್ಚು ಮಾಡಿ ನಿರ್ಮಿಸಿದೆ ಬಾಂದಾರು ಮತ್ತು ನಾಲಾ ಕಾಮಗಾರಿಗಳು ಕಳಪೆ ಕಾಮಗಾರಿಯಿಂದಾಗಿ ಸಂಪೂರ್ಣ ನಾಶವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಉತ್ತರ ಕನ್ನಡ ಜಿಲ್ಲೆ ಜೊಯಿಡಾ ತಾಲೂಕಿನ ಬಿಡೋಲಿ ಹತ್ತಿರ ಬಂದಾರ ಹಾಗೂ ಕಾಲುವೆ ನಿರ್ಮಾಣ ಕಾಮಗಾರಿಯನ್ನು 2018-19ನೇ ಸಾಲಿನಲ್ಲಿ ವಿಶೇಷ ಘಟಕ ಯೋಜನೆಯಡಿಯಲ್ಲಿ ರೂ.50.00 ಲಕ್ಷ ಅಂದಾಜು ಮೊತ್ತದಲ್ಲಿ ಕೈಗೊಳ್ಳಲು ಅನುಮೋದನೆ ನೀಡಲಾಗಿರುತ್ತದೆ. ಅದರಂತೆ ಸದರಿ ಕಾಮಗಾರಿಯನ್ನು ಟೆಂಡರ್ ಮೂಲಕ ಕೈಗೊಂಡಿದ್ದು ಬಿಡೋಲಿ ವ್ಯಾಪ್ತಿಯ ಹಳ್ಳದಲ್ಲಿ 2.00ಮೀ. ಎತ್ತರಕ್ಕೆ ನೀರು ಶೇಖರಣೆಯಾಗುವಂತೆ 13.50ಮೀ. ಉದ್ದಕ್ಕೆ ಬಂದಾರ ಹಾಗೂ 23.50ಮೀ. ಉದ್ದದ ಕಾಂಕ್ರೀಟ್ ಕಾಲುವೆ ನಿರ್ಮಾಣ ಕಾಮಗಾರಿಯನ್ನು ಕೈಗೊಂಡು 2021ನೇ ಸಾಲಿನ ಮೇ ತಿಂಗಳಿನಲ್ಲಿ ಕಾಮಗಾರಿಯು ಪೂರ್ಣಗೊಳಿಸಿ, ಬಂದಾರದಲ್ಲಿ ನೀರನ್ನು ನಿಲ್ಲಿಸಿ ಕಾಲುವೆ ಮುಖಾಂತರ ನೀರಾವರಿ ಸೌಲಭ್ಯವನ್ನು ಒದಗಿಸಲಾಗಿರುತ್ತದೆ.<br>ಸದರಿ ಕಾಮಗಾರಿಯನ್ನು ಟೆಂಡರ್‌ನ ವಿಶಿಷ್ಟ ವಿವರಣೆಯಂತೆ ಕೈಗೊಳ್ಳಲಾಗಿದ್ದು, ಕಾಮಗಾರಿಯ ಗುಣಮಟ್ಟವನ್ನು ಇಲಾಖೆಯ ಗುಣ ನಿಯಂತ್ರಣ ಪ್ರಾಧಿಕಾರದಿಂದ ಪರೀಕ್ಷೆಗೆ ಒಳಪಡಿಸಲಾಗಿದ್ದು ಕಳಪೆ ಕಾಮಗಾರಿಯನ್ನು ನಿರ್ವಹಿಸಿರುವುದು ಕಂಡು ಬಂದಿರುವುದಿಲ್ಲ.<br>ಉತ್ತರ ಕನ್ನಡ ಜಿಲ್ಲೆಯಲ್ಲಿ 2020-21 ಹಾಗೂ 2021-22 ನೇ ಸಾಲಿನಲ್ಲಿ ಭಾರೀ ಮಳೆಯಿಂದ ಪ್ರವಾಹ ಉಂಟಾಗಿದ್ದು, ಸದರಿ ಬಂದಾರಕ್ಕೆ ಯಾವುದೇ ರೀತಿಯಲ್ಲಿ ಹಾನಿಯಾಗಿರುವುದು ಕಂಡು ಬಂದಿರುವುದಿಲ್ಲ. |
| ಆ | ಸದರಿ ಕಾಮಗಾರಿಗೆ ಬಿಡುಗಡೆ ಆದ ಅನುದಾನ ಎಷ್ಟು; ಇದನ್ನು ಗುತ್ತಿಗೆ ಪಡೆದುಕೊಂಡಿರುವ ಗುತ್ತಿಗೆದಾರರು ಯಾರು; ಈ ಸ್ಥಳದಲ್ಲಿ ಸದರಿ ಕಾಮಗಾರಿ ಮಾಡಲು ನಿಯಮದ ಪ್ರಕಾರ ಅವಕಾಶವಿಲ್ಲದಿದ್ದರೂ ಕಾಮಗಾರಿ ಮಾಡಿರುತ್ತಾರೆಂದು ತಿಳಿದುಬಂದಿದ್ದು ಇದಕ್ಕೆ ಯಾರು ಹೊಣೆ; ಸಂಬಂಧಿಸಿದ ಅಧಿಕಾರಿಗಳು ಈ ಬಗ್ಗೆ ನಿಗಾವಹಿಸದಿರಲು ಕಾರಣವೇನು ? | ಈ ಕಾಮಗಾರಿಯನ್ನು ಶ್ರೀ ಶ್ರೀಕಾಂತ ದೇಸಾಯಿ, ಗುತ್ತಿಗೆದಾರರು, ಜೊಯಿಡಾ ಇವರಿಗೆ ರೂ.32.19ಲಕ್ಷಗಳಿಗೆ ಟೆಂಡರ್ ಆಧಾರದ ಮೇಲೆ ವಹಿಸಿಕೊಡಲಾಗಿತ್ತು. ಸದರಿ ಕಾಮಗಾರಿಯನ್ನು 2021ನೇ ಸಾಲಿನ ಮೇ ತಿಂಗಳಿನಲ್ಲಿ ಪೂರ್ಣಗೊಳಿಸಲಾಗಿರುತ್ತದೆ ಹಾಗೂ ರೂ.30.71 ಲಕ್ಷ ವೆಚ್ಚವಾಗಿದ್ದು ಅದರಂತೆ ಅನುದಾನವು ಬಿಡುಗಡೆಯಾಗಿರುತ್ತದೆ.<br>ಬಿಡೋಲಿ ಬಳಿಯ ಹಳ್ಳದ ಅಕ್ಕಪಕ್ಕದ ರೈತರು ವಿಶೇಷವಾಗಿ ಅನುಸೂಚಿತ ಜಾತಿಯ ರೈತರ ಬಹುದಿನಗಳ ಬೇಡಿಕೆ ಅನುಸಾರ ಹಾಗೂ ಹಳಿಯಾಳ ಮತಕ್ಷೇತ್ರದ ಮಾನ್ಯ ಶಾಸಕರ ಕೋರಿಕೆಯ |

| | | |
|---|---|---|
| | | ಮೇರೆಗೆ ಸದರಿ ಸ್ಥಳದಲ್ಲಿ ಬಂದಾರ ನಿರ್ಮಿಸಲು 2018-19ನೇ ಸಾಲಿನಲ್ಲಿ ವಿಶೇಷ ಘಟಕ ಯೋಜನೆ ಅಡಿ ರೂ.50.00 ಲಕ್ಷ ಅಂದಾಜು ಮೊತ್ತಕ್ಕೆ ಕಾಮಗಾರಿಯನ್ನು ಕೈಗೊಳ್ಳಲು ಸರ್ಕಾರದಿಂದ ಅನುಮೋದನೆ ನೀಡಲಾಗಿರುತ್ತದೆ.<br><br>ಸದರಿ ಬಂದಾರ ನಿರ್ಮಾಣದ ನಂತರ 23.50ಮೀ. ಬಲಭಾಗದ ಕಾಂಕ್ರೀಟ್ ಕಾಲುವೆ ಹಾಗೂ ಉಳಿದಂತೆ ಮಣ್ಣಿನ ಕಾಲುವೆ ಮುಖಾಂತರ ಅನುಸೂಚಿತ ಜಾತಿಯ ರೈತರ ಜಮೀನುಗಳಿಗೆ ನೀರಾವರಿ ಸೌಲಭ್ಯವನ್ನು ಕಲ್ಪಿಸಲು ಸಾಧ್ಯವಾಗಿರುತ್ತದೆ. ಅಲ್ಲದೆ, ಬಂದಾರದ ಮೇಲ್ಭಾಗದಲ್ಲಿ ಶೇಖರಣೆಯಾಗಿರುವ ನೀರನ್ನು ಪಂಪ್‌ಗಳ ಮುಖಾಂತರ ರೈತರಿಗೆ ನೀರಾವರಿ ಸೌಲಭ್ಯವನ್ನು ಕಲ್ಪಿಸಲು ಕೂಡ ಸಾಧ್ಯವಾಗಿರುತ್ತದೆ. ಬಂದಾರ ನಿರ್ಮಾಣದಿಂದ ಸುತ್ತಮುತ್ತಲಿನ ಅಂತರ್ಜಲ ವೃದ್ಧಿಯಾಗಿರುವುದರೊಂದಿಗೆ ಪರೋಕ್ಷ ಹಾಗೂ ಅಪರೋಕ್ಷವಾಗಿ ರೈತರ ಜಮೀನುಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸಲು ಸಹಕಾರಿಯಾಗಿರುತ್ತದೆ ಹಾಗೂ ಬೇಸಿಗೆ ಕಾಲದಲ್ಲಿ ಕುಡಿಯುವ ನೀರಿಗಾಗಿ ಅನುಕೂಲವಾಗಿರುತ್ತದೆ. |
| ಇ | ಸಣ್ಣ ನೀರಾವರಿ ಇಲಾಖೆಯಿಂದ ಬಾಂದಾರು ಕೆರೆ ನಿರ್ಮಿಸುವಾಗ ಕನಿಷ್ಟ 50 ಎಕರೆ ರೈತರ ಜಮೀನಿಗಾದರೂ ನೀರು ಸರಬರಾಜು ಆಗುವ ಹಾಗೆ ಇರಬೇಕು. ಆದರೆ ಬಿರಡೊಳ್ಳಿ ಪಾಟ್ನೆಯಲ್ಲಿ ನಿರ್ಮಿಸಿದ ಈ ಬಾಂದಾರಿನ ಕೆಳಭಾಗದಲ್ಲಿ ಕೇವಲ 2 ಎಕರೆಯಷ್ಟು ಜಮೀನು ಮಾತ್ರ ಇದ್ದು ಯಾವ ನಿಯಮದ ಪ್ರಕಾರ ಇಲ್ಲಿ ಬಾಂದಾರು ನಿರ್ಮಾಣವಾಗಿರುತ್ತದೆ; ಈ ಬಗ್ಗೆ ಸರ್ಕಾರ ಸೂಕ್ತ ತನಿಖೆ ಮಾಡಿ ಸಂಬಂಧಿಸಿದವರ ಮೇಲೆ ಕ್ರಮ ಕೈಗೊಳ್ಳುವುದೇ; ಹೌದಾದಲ್ಲಿ ಯಾವ ಕಾಲಮಿತಿಯೊಳಗೆ ಕ್ರಮ ಕೈಗೊಳ್ಳಲಾಗುವುದು? (ವಿವರ ನೀಡುವುದು) | ಸಣ್ಣ ನೀರಾವರಿ ಇಲಾಖೆಯಿಂದ 40 ಹೆಕ್ಟೇರ್‌ಗಳಿಗಿಂತ ಮೇಲ್ಪಟ್ಟು ಹಾಗೂ 2000 ಹೆಕ್ಟೇರ್‌ವರೆಗಿನ ಸಣ್ಣ ನೀರಾವರಿ ಯೋಜನೆಗಳನ್ನು ಕಾರ್ಯಗತಗೊಳಿಸಲಾಗುತ್ತಿದೆ. ವಿಶೇಷ ಘಟಕ ಯೋಜನೆಯಡಿ ಮಂಜೂರಾಗುವ ಕಾಮಗಾರಿಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸಲು ಫಲಾನುಭವಿಗಳ ಜಮೀನುಗಳ ಒಟ್ಟು ವಿಸ್ತೀರ್ಣವು ಇಂತಿಷ್ಟೇ ಇರಬೇಕೆಂದು ಯಾವುದೇ ಮಾನದಂಡವು ಇರುವುದಿಲ್ಲ. ಅಲ್ಲದೆ, ಅನುಸೂಚಿತ ಜಾತಿಗೆ ಸೇರಿದ ರೈತರ 50 ಎಕರೆ ವಿಸ್ತೀರ್ಣದ ಜಮೀನುಗಳು ಒಂದೇ ಸ್ಥಳದಲ್ಲಿ ಸಿಗುವುದು ಕಷ್ಟಸಾಧ್ಯವಾಗಿರುತ್ತದೆ. ಹಾಗೂ ವಿಶೇಷ ಘಟಕ ಯೋಜನೆ ಅಡಿ ಕೈಗೊಳ್ಳಲಾಗುವ ಕಾಮಗಾರಿಗಳು ಫಲಾನುಭವಿ ಆಧಾರಿತವಾಗಿರುತ್ತವೆ.<br><br>ಬಿಡೋಲಿ ಬಾಂದಾರ ನಿರ್ಮಿಸುವ ಪೂರ್ವದಲ್ಲಿ ಸ್ಥಳೀಯ ಅನುಸೂಚಿತ ಜಾತಿಯ ರೈತರು ಸದರಿ ಹಳ್ಳಕ್ಕೆ ಹಲವಾರು ವರ್ಷಗಳಿಂದ ಮಣ್ಣಿನ ಬಂಡ್‌ನ್ನು ನಿರ್ಮಿಸಿ ನೀರಾವರಿ ಸೌಲಭ್ಯ ವ್ಯವಸ್ಥೆ ಮಾಡಿಕೊಂಡಿದ್ದು ಮಳೆಗಾಲದಲ್ಲಿ ಹಳ್ಳದಲ್ಲಿನ ನೀರಿನಿಂದ ಬಂಡ್ ಒಡೆದು ಪ್ರತಿಬಾರಿ ಮಣ್ಣಿನ ಬಂಡ್‌ನ್ನು ಹೊಸದಾಗಿ ನಿರ್ಮಿಸಿ ನೀರಾವರಿ ಸೌಲಭ್ಯ ಪಡೆದುಕೊಳ್ಳಲು ತೀವ್ರ ಆರ್ಥಿಕ ಸಮಸ್ಯೆ ಹಾಗೂ ಅನಾನುಕೂಲವಾಗುತ್ತಿದ್ದ ಕಾರಣ ಶಾಶ್ವತವಾಗಿ ನೀರಾವರಿ ಸೌಲಭ್ಯಕ್ಕಾಗಿ ಸದರಿ ಹಳ್ಳಕ್ಕೆ ಬಂದಾರ ನಿರ್ಮಿಸಲು ಇಲಾಖೆಗೆ ಹಾಗೂ ಸ್ಥಳೀಯ ಶಾಸಕರಿಗೆ ಒತ್ತಾಯಿಸುತ್ತ ಬಂದಿರುತ್ತಾರೆ. ಫಲಾನುಭವಿ ರೈತರ ಜಮೀನು ಅರಣ್ಯ ಪ್ರದೇಶದ ಪಕ್ಕದಲ್ಲಿ ಬರುತ್ತಿದ್ದು ಬೇರೆ ಯಾವುದೇ ರೀತಿಯಲ್ಲಿ ನೀರಾವರಿ ಸೌಲಭ್ಯ ಕಲ್ಪಿಸಲು ಅವಕಾಶವಿಲ್ಲದ್ದರಿಂದ ಬಂದಾರ ನಿರ್ಮಿಸುವುದು ಸೂಕ್ತವಾದ್ದರಿಂದ ಹಾಗೂ ಸ್ಥಳೀಯ ಶಾಸಕರು ಪ್ರಸ್ತಾಪಿಸಿರುವ ಕಾರಣ ಕಾಮಗಾರಿಯನ್ನು ನಿಯಮಾನುಸಾರ |

| | | |
|---|---|---|
| | | ವಿಶೇಷ ಘಟಕ ಯೋಜನೆಯಡಿ ಕೈಗೊಳ್ಳಲಾಗಿರುತ್ತದೆ. ಸದರಿ ಬಂದಾರ ನಿರ್ಮಿಸಿರುವುದರಿಂದ ಅನುಸೂಚಿತ ಜಾತಿಯ ರೈತರ 3ಎ-25 ಗುಂಟೆ ಜಮೀನಿಗೆ ನೀರಾವರಿ ಸೌಲಭ್ಯ ಕಲ್ಪಿಸಲು ಸಾಧ್ಯವಾಗಿದ್ದು ಇದರಿಂದ ಫಲಾನುಭವಿಗಳಿಗೆ ಉತ್ತಮ ರೀತಿಯಲ್ಲಿ ಬೆಳೆಗಳನ್ನು ಬೆಳೆದು ಆರ್ಥಿಕ ಪರಿಸ್ಥಿತಿ ಸುಧಾರಿಸಲು ಸಹಕಾರಿಯಾಗಿರುತ್ತದೆ. ಮುಂದುವರೆದು ಸದರಿ ಸ್ಥಳದಲ್ಲಿ ಬಾಂದಾರ ನಿರ್ಮಾಣದಿಂದ ಶೇಖರಣೆಯಾಗಿರುವ ನೀರಿನಿಂದ ಸುತ್ತಮುತ್ತಲಿನ ಅಂತರ್ಜಲ ಮಟ್ಟ ವೃದ್ಧಿಯಾಗಲು ಅನುಕೂಲವಾಗಿರುತ್ತದೆ.<br><br>ಸದರಿ ಕಾಮಗಾರಿಯಿಂದ ಅನುಸೂಚಿತ ಜಾತಿಯ ಫಲಾನುಭವಿ ರೈತರಿಗೆ ನೀರಾವರಿ ಸೌಲಭ್ಯ ಒದಗಿಸಿ ಆರ್ಥಿಕ ಸುಧಾರಣೆಗೆ ಸಹಕಾರಿಯಾಗಿರುವುದರಿಂದ ಯಾವುದೇ ಅಧಿಕಾರಿಗಳ ಮೇಲೆ ತನಿಖೆ ಮಾಡಿ ಕ್ರಮ ಕೈಗೊಳ್ಳುವ ಪ್ರಶ್ನೆ ಉದ್ಭವಿಸುವುದಿಲ್ಲ. |

ಸಂಖ್ಯೆ: MID 103 LCQ 2021.

(ಜೆ.ಸಿ.ಮಾಧುಸ್ವಾಮಿ)
ಕಾನೂನು, ಸಂಸದೀಯ ವ್ಯವಹಾರಗಳು
ಹಾಗೂ ಶಾಸನ ರಚನೆ ಮತ್ತು
ಸಣ್ಣ ನೀರಾವರಿ ಸಚಿವರು.